CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ನವೆಂಬರ್ ೨೦, ೨೦೦೩ (ಕಾರ್ತಿಕ ೨೯, ಶಕ ವರ್ಷ ೧೯೨೫) | ಸಂಚಿಕೆ ೪೬ |
|---|---|---|

## ಭಾಗ - ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

ಸಹಕಾರ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 97 ಸಿಎನ್‌ಎಸ್ 2003, ಬೆಂಗಳೂರು, ದಿನಾಂಕ: 1ನೇ ಅಕ್ಟೋಬರ್ 2003**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕಿನ ಶಿದ್ನಾಳ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ, ಶಿದ್ನಾಳ ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಈ ಹಿಂದೆ ಸದರಿ ಬ್ಯಾಂಕಿಗೆ ನಾಮ ನಿರ್ದೇಶನ ಮಾಡಿದ್ದಲ್ಲಿ, ಆ ನಾಮನಿರ್ದೇಶನವು ಈ ಕೂಡಲೇ ರದ್ದಾಗುತ್ತವೆ.

1) ಶ್ರೀ ಬಸಪ್ಪ ನಿಂಗಪ್ಪ ಗವಣ್ಣವರ
2) ಶ್ರೀ ಲಕ್ಷ್ಮಣ ಹನುಮಂತಪ್ಪ ಮಾದರ
3) ಶ್ರೀಮತಿ ಹುಸೇನ ಬಿ. ಬಾಬುಸಾಬ್ ಮುನವಳ್ಳಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1165 — **ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 99 ಸಿಎನ್‌ಎಸ್ 2003, ಬೆಂಗಳೂರು, ದಿನಾಂಕ: 13ನೇ ಅಕ್ಟೋಬರ್ 2003**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನವನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್, ಜಗಳೂರು, ದಾವಣಗೆರೆ ಜಿಲ್ಲೆ ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶ್ರೀಮತಿ ಚೌಡಮ್ಮ ಕೋಂ ಲೇಟ್ ಓಬಯ್ಯ,
   ಜಯಚಾಮರಾಜೇಂದ್ರ ಬಡಾವಣೆ, ಜಗಳೂರು, ದಾವಣಗೆರೆ ಜಿಲ್ಲೆ.

2) ಶ್ರೀ ಚೆನ್ನಪ್ಪ ಬಿನ್ ನಾಗಪ್ಪ
ಚಿಕ್ಕಮ್ಮನಹಟ್ಟಿ, ಕೆಚ್ಚೇನಹಳ್ಳಿ ಅಂಚೆ, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ.

3) ಶ್ರೀಮತಿ ಸರೋಜಮ್ಮ ಕೋಂ ಬಸವರಾಜು
ಹನುಮಂತಪುರ, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1166

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ನಅಇ 36 ಎಂಎಲ್‌ಆರ್ 2002 (ಸಿ-78), ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2003

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಗುಬ್ಬಿ ಪಟ್ಟಣ ಪಂಚಾಯಿತಿಗೆ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರ ನಾಮ ನಿರ್ದೇಶನ ಮಾಡಿದೆ.

1. ಶ್ರೀಮತಿ ಬಿ.ಎನ್. ಮಂಗಳಾ ರವೀಶ್, ಹೊಸಬಡಾವಣೆ, ಗುಬ್ಬಿ.
2. ಶ್ರೀ ರಂಗಸ್ವಾಮಿ ಬಿನ್ ಚಿಕ್ಕಲಿಂಗಯ್ಯ, ಹಳೇ ಎ.ಕೆ. ಕಾಲೋನಿ, ಗುಬ್ಬಿ.
3. ಶ್ರೀ ಮಹಬೂಬ್ ಪಾಷ ಬಿನ್ ಮಹಮದ್ ಆಯ್ಯೂಬ್, ಕಾಯಿಪೇಟೆ, ಗುಬ್ಬಿ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1167

**ಜಗದೀಶ್ ಜೋಯಿಸ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## LABOUR SECRETARIAT

## NOTIFICATION

### No. LD 549 LSI 2002, Bangalore, dated: 27th October 2003

In exercise of the powers conferred by Section 87 read with 91-A of the ESI Act (Central Act 34 of 1948) the Government of Karnataka hereby exempts the Karnataka Co-Operative Handloom Weavers Federation Limited from the operation of the said Act for the period from 27.01.1985 to 31.10.1989 subject to the following conditions viz.,

i) The employer shall maintain a register showing the names and designations of the exempted employees and;

ii) Both the Employer and Employees should contribute to the ESI Scheme with effect from 01.11.1989.

By Order and in the name of the Governor of Karnataka,

P.R. 1168

**H. VISWANATH**

Under Secretary to Government,
Labour Department (ESIS (M) Services).

## ENERGY SECRETARIAT

## NOTIFICATION

### No. DE 93 EBS 2003, Bangalore, dated: 3rd November 2003

Consequent to the issue of Karnataka Ordinance No.8 of 2003 in respect of the Karnataka Electricity (Taxation on Consumption) (Amendment) Ordinance 2003 issued vide Notification No.DPAL 54 SHASAN 2003, dated: 16.10.2003, Government hereby withdraws the earlier Government Notification No. DE 210 EEB 95, dated: 18/24.6.1997 with regard to exemption from payment of Electricity Tax under the Karnataka Electricity (Taxation on Consumption) Act 1959 on captive (self consumption) generation w.e.f. 16.10.2003 and until further orders.

By Order and in the name of the Governor of Karnataka,

P.R. 1169

**M.K. BHARMARAJAPPA**

Desk Officer, Energy Department.

## HEALTH & FAMILY WELFARE SECRETARIAT

## NOTIFICATION

### No. HFW 02 IMM 2003, Bangalore, dated: 28th October 2003

In exercise of the powers conferred by subsection (1) of Section 20 of Drugs and Cosmetics Act 1940 the Government of Karnataka hereby appoint Sri Shivalingaiah Mohan, Senior Chemist, Drugs

Testing Laboratory, Bangalore as Government Analyst for the whole State of Karnataka in respect of all Drugs and Cosmetics except vaccine and sera with immediate effect and until further orders.

By Order and in the name of the Governor of Karnataka,

P.R. 1170

**CHOMANAYAK G.**

Under Secretary to Government,

Health & Family Welfare Department.

## ಕಂದಾಯ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಆರ್‌ಡಿ 4 ಎಲ್‌ಆರ್‌ಎ 2002, ಬೆಂಗಳೂರು, ದಿನಾಂಕ: 9ನೇ ಅಕ್ಟೋಬರ್ 2003

ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 48(1) (3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರದ ಸಮಸಂಖ್ಯೆಯ ಅಧಿಸೂಚನೆ ದಿನಾಂಕ: 1.1.2003 ರಲ್ಲಿ ಉಡುಪಿ ತಾಲ್ಲೂಕು-1 ಮತ್ತು 3ರ ಹೆಚ್ಚುವರಿ ಭೂನ್ಯಾಯ ಮಂಡಳಿಗೆ ಉಡುಪಿ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರನ್ನು ಹಾಗೂ ಉಡುಪಿ ತಾಲ್ಲೂಕು-2, ಹೆಚ್ಚುವರಿ ಭೂ ನ್ಯಾಯ ಮಂಡಳಿಗೆ ದಿನಾಂಕ: 3.3.2003 ರಂದು ಉಪ ವಿಭಾಗಾಧಿಕಾರಿ, ಕುಂದಾಪುರ ಅವರುಗಳನ್ನು ಅಧ್ಯಕ್ಷರನ್ನಾಗಿ ನೇಮಿಸಿದ್ದನ್ನು ರದ್ದುಪಡಿಸಿ, ಅವರ ಬದಲಿಗೆ ಶ್ರೀ ಭಕ್ತರಾಮೇಗೌಡ, ಸಹಾಯಕ ಆಯುಕ್ತರು, ಅವರನ್ನು ಉಡುಪಿ ಹೆಚ್ಚುವರಿ ತಾಲ್ಲೂಕು-1, 2 ಮತ್ತು 3ರ ಭೂ ನ್ಯಾಯ ಮಂಡಳಿಯ ಅಧ್ಯಕ್ಷರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1171

**ವಿ. ರಾಧಾಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸುಧಾರಣೆ).

### ಅಧಿಸೂಚನೆ

### ಸಂಖ್ಯೆ: ಕಂಇ 145 ಎಲ್‌ಆರ್‌ಎ 2002, ಬೆಂಗಳೂರು, ದಿನಾಂಕ: 18ನೇ ಸೆಪ್ಟೆಂಬರ್ 2003

ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ (1962ರ 10ನೇ ಸಂಖ್ಯೆಯ ಕರ್ನಾಟಕ ಕಾಯ್ದೆ ತಿದ್ದುಪಡಿಯಾದಂತೆ)ರ ಕಲಂ 48ರ ಉಪ ಕಲಂ 1 ರಿಂದ 3 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ವಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕು ಭೂ ನ್ಯಾಯ ಮಂಡಳಿಗೆ ಈ ಹಿಂದೆ ಅಧಿಸೂಚನೆ ಸಂಖ್ಯೆ: ಆರ್‌ಡಿ 56 ಎಲ್‌ಆರ್‌ಎ 2000, ದಿನಾಂಕ: 18.02.2002ರ ಅಧಿಸೂಚನೆಯಲ್ಲಿ ಮಾಡಿದ್ದ ನಾಮ ನಿರ್ದೇಶನಗಳಲ್ಲಿ ಶ್ರೀ ವಿಠಲ್ ಫುಂಡಪ್ಪ ಶಿವಶರಣ ಅವರ ನಾಮ ನಿರ್ದೇಶನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ, ಅವರ ಬದಲಿಗೆ ಶ್ರೀ ಅಡಿವೆಪ್ಪ ಸುಭಾ ಅಂಜುಟಗಿ (ಎಸ್‌ಸಿ) ಇಂಡಿ ತಾಲ್ಲೂಕು, ವಿಜಾಪುರ ಜಿಲ್ಲೆ, ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಿ ಸದರಿ ಭೂ ನ್ಯಾಯ ಮಂಡಳಿಯನ್ನು ಪುನರ್ ರಚಿಸಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1172

**ವಿ. ರಾಧಾಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸುಧಾರಣೆ).

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ನಅಇ 341 ಮೈಅಪ್ರಾ 2003 (ಭಾಗ), ಬೆಂಗಳೂರು, ದಿನಾಂಕ: 3ನೇ ನವೆಂಬರ್ 2003

ದಿನಾಂಕ: 11.9.2003 ಸಂಖ್ಯೆ: ನಅಇ 341 ಮೈಅಪ್ರಾ 2003ರ ಅಧಿಸೂಚನೆಯನ್ನು ರದ್ದುಪಡಿಸಿ, ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 3(ಎ) ಮತ್ತು 3(ಎಂ) ಹಾಗೂ 5 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ಚಿಕ್ಕಮಗಳೂರು ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು ಮತ್ತು ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ | ವರ್ಗ | ಹುದ್ದೆ |
|---|---|---|---|
| 1 | ಶ್ರೀ ಅತೀಖ್ ಖೈಸರ್ ಬಿನ್ ಶ್ರೀ ಮೊಹಮ್ಮದ್ ಅತಾವುಲ್ಲಾ, ಸಂದಲ್ ಮನೆಗಾರ್ ಬೀದಿ, ಚಿಕ್ಕಮಗಳೂರು. | ಅಲ್ಪಸಂಖ್ಯಾತರು | ಅಧ್ಯಕ್ಷರು |
| 2 | ಶ್ರೀಮತಿ ಕಮಲಮ್ಮ ಪುಟ್ಟಸ್ವಾಮಿ ಕೋಂ ಲೇಟ್ ಜಿ. ಪುಟ್ಟಸ್ವಾಮಿ, 2ನೇ ಕ್ರಾಸ್, ರಾಮೇಶ್ವರ ಬಡಾವಣೆ, ಚಿಕ್ಕಮಗಳೂರು. | ಪ.ಜಾತಿ : ಮಹಿಳೆ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1173

**ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 57 ಸಿಎಂಎಂ 2003, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2003**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 5 ಸಿಎಂಎಂ 2001, ದಿನಾಂಕ: 24.9.2001 ರಲ್ಲಿ ಕರ್ನಾಟಕ ರಾಜ್ಯ ಸಹಕಾರಿ ಮಹಾಮಂಡಳ (ನಿ), ಬೆಂಗಳೂರು, ಇದರ ಆಡಳಿತ ಮಂಡಳಿಗೆ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 29(1) ರಡಿಯಲ್ಲಿ ಮಾಡಲಾಗಿದ್ದ ಎಲ್ಲಾ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1174

**ಅಹ್ಮದ್ ಎ. ಮುಖ್ತಿದರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 99 ಸಿಎನ್‌ಎಸ್ 2002, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 99 ಸಿಎನ್‌ಎಸ್ 2002, ದಿನಾಂಕ: 14.11.2002 ಮತ್ತು ದಿನಾಂಕ: 22.07.2003 ರಲ್ಲಿ ಕೋಲಾರ ಜಿಲ್ಲಾ ಸಹಕಾರ ಹಾಲು ಉತ್ಪಾದಕರ ಒಕ್ಕೂಟ ನಿ., ಕೋಲಾರ ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1175

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 99 ಸಿಎನ್‌ಎಸ್ 2003, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 99 ಸಿಎನ್‌ಎಸ್ 2003, ದಿನಾಂಕ: 13.10.2003 ರಲ್ಲಿ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1176

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## URBAN DEVELOPMENT SECRETARIAT

### NOTIFICATION

**No. UDD 26 TCT 2003, Bangalore, dated: 4th November 2003**

The draft of the following rules, further to amend the Karnataka Municipal Corporations (Election) Rules, 1979, which the Government of Karnataka proposes to make in exercise of the powers conferred by Section 421 of the Karnataka municipal corporations Act, 1976 (Karnataka Act 14 of 1977) is hereby published as required under subsection (1) of the said section for the information of all persons likely to be affected there by and notice is hereby given that the said draft will be taken into consideration after thirty days from the date of its publication in the Official Gazette.

Any objection or suggestion, which may be received by the State Government from any person with respect to the said draft before the expiry of the period specified above, will be considered by the State Government. Objections and suggestions may be addressed to the Principal Secretary to Government, urban Development Department, M.S. Building, Bangalore-560 001.

### DRAFT RULES

**1. Title and commencement:** (1) These rules may be called the Karnataka Municipal Corporations (Election) (Amendment) Rules, 2003.

(2) They shall come into force from the date of their publication in the official Gazette.

**2. Amendment of Rule 71:** In rule 71 of the Karnataka Municipal Corporations (Election) Rules, 1979, for the words "Divisional Commissioner of the concerned Revenue Division" the words "Deputy Commissioner of the concerned Revenue District" shall be substituted.

By Order and in the name of the Governor of Karnataka,

P.R. 1177

**KEMPAVEERAIAH**

Under Secretary to Government, (I/c)

Urban Development Department.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಮಮಅ 43 ರಾಮಅ 2003, ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2003**

ಬಾಲಭವನ ಸೊಸೈಟಿ, ಬೆಂಗಳೂರು, - ಇದರ ನಿಯಮಾವಳಿ ಮತ್ತು ನಿಬಂಧನೆ ನಿಯಮ 11ರ ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಬಾಲಭವನ ಸೊಸೈಟಿ, ಬೆಂಗಳೂರು, ಇದರ ಅಧ್ಯಕ್ಷರ ಸ್ಥಾನಕ್ಕೆ ಶ್ರೀಮತಿ ಮುಕ್ತರುನ್ನಿಸ್ಸಾ ಬೇಗಂ, ಮಾಜಿ ಶಾಸಕರು, ಇವರನ್ನು ಶ್ರೀಮತಿ ಮಂಜುಳಾ ನಾಯ್ಡುರವರ ಸ್ಥಾನದಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1178

**ಪಾರ್ವತಿ ಕೇಶವಾಚಾರ್**

ಸರ್ಕಾರದ ಉಪ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## WOMEN AND CHILDREN DEVELOPMENT SECRETARIAT

### NOTIFICATION

**No. WCD 99 PHP 2003, Bangalore, dated: 18th October 2003**

Government of Karnataka vide Notification No. WCD 434 PHP 98, dated: 6.11.99 has appointed the Principal Secretary, Women and Child Development Department, as Commissioner for Persons With Disabilities under Section 60(1) of the Persons With Disabilities (Equal Opportunities, Protection of rights and Full participation) Act, 1995.

As per the provisons of the Sec.60(4) and Sec 60(5) of the above said Act, in order to assist the Commissioner for Persons with Diabilities in the discharge of his duties the Deputy Commissioners of the Districts have been appointed as the **Deputy Commissioners Disabilities** with immediate effect and until further orders.

By Order and in the name of the Governor of Karnataka,

P.R. 1179

**P.D. SIDDHANTI**

Under Secretary to Government,

Women and Children Development Department.

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 100 ಸಿಎನ್‌ಎಸ್ 2002, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 100 ಸಿಎನ್‌ಎಸ್ 2002, ದಿನಾಂಕ: 14.10.2003 ರಲ್ಲಿ ಗುರುದೇವರಹಳ್ಳಿ, ಹಾಲು ಉತ್ಪಾದಕರ ಸಹಕಾರ ಸಂಘ ನಿ., ಗುರುದೇವರಹಳ್ಳಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1180

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 100 ಸಿಎನ್‌ಎಸ್ 2002, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2003**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕಿನ ಗುರುದೇವರಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಗುರುದೇವರಹಳ್ಳಿ, ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಈ ಹಿಂದೆ ಸದರಿ ಸಂಘಕ್ಕೆ ನಾಮನಿರ್ದೇಶನ ಮಾಡಿದ್ದಲ್ಲಿ ಆ ನಾಮನಿರ್ದೇಶನಗಳು ಈ ಕೂಡಲೇ ರದ್ದಾಗುತ್ತದೆ.

1) ಶ್ರೀ ಜಿ.ಡಿ. ಪುಟ್ಟೇಗೌಡ ಬಿನ್ ಸಿದ್ದೇಗೌಡ ಉ: ದುಂಡೇಗೌಡ
2) ಶ್ರೀಮತಿ ಚಂದ್ರಮ್ಮ ಕೋಂ ಸಿ. ಬೋರೇಗೌಡ
3) ಶ್ರೀಮತಿ ಮಹದೇವಮ್ಮ ಕೋಂ ದಾಸಯ್ಯ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1181

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 120 ಸಿಎನ್‌ಎಸ್ 2000, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 120 ಸಿಎನ್‌ಎಸ್ 2000, ದಿನಾಂಕ: 16.06.2000 ಮತ್ತು 06.07.2000 ರಲ್ಲಿ ದಾವಣಗೆರೆ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಸಹಕಾರ ಬ್ಯಾಂಕ್ ನಿ., ದಾವಣಗೆರೆ, ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಇವರ ಸ್ಥಾನದಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ದಾವಣಗೆರೆ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಸಹಕಾರ ಬ್ಯಾಂಕ್ ನಿ., ದಾವಣಗೆರೆ, ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶ್ರೀ ಎಸ್.ಎಂ. ರುದ್ರಪ್ಪ ಬಿನ್ ಮಲ್ಲಪ್ಪ, ಶ್ಯಾಗಲಿ, ದಾವಣಗೆರೆ ತಾಲ್ಲೂಕು.
2) ಶ್ರೀಮತಿ ನಾಗವೇಣಿ ಕೋಂ ಬಿ.ಜಿ. ಹನುಮಂತಪ್ಪ, ಮಾಯಕೊಂಡ, ದಾವಣಗೆರೆ ತಾಲ್ಲೂಕು.
3) ಶ್ರೀ ಕೆ.ಹೆಚ್. ಭೀಮಪ್ಪ ಬಿನ್ ಹನುಮಂತಪ್ಪ ಆಲೂರು, ದಾವಣಗೆರೆ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1182

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 137 ಪಿಎಂಸಿ 2003, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 72 ಎಸ್‌ಎಎಸ್ 2003, ದಿನಾಂಕ: 20.10.2003 ರಲ್ಲಿ ಡಾ: ಐ. ದೇವೇಂದ್ರನ್ ಐ.ಎ.ಎಸ್. ಇವರ ಸೇವೆಯನ್ನು ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿಯಲ್ಲಿ ಖಾಲಿ ಇರುವ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಗೆ ನೇಮಕ ಮಾಡಲು ಸಹಕಾರ ಇಲಾಖೆಗೆ ನೀಡಲಾಗಿದೆ.

ಆದ್ದರಿಂದ, ಡಾ: ಐ. ದೇವೇಂದ್ರನ್, ಐ.ಎ.ಎಸ್. ಇವರನ್ನು ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳದಲ್ಲಿ ಖಾಲಿ ಇರುವ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಗೆ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1183

**ಅಹ್ಮದ್ ಎ. ಮುಖ್ತಾದರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 166 ಎಲ್‌ಆರ್‌ಎಂ 2001, ಬೆಂಗಳೂರು, ದಿನಾಂಕ: 1ನೇ ಅಕ್ಟೋಬರ್ 2003**

ಬಾಲನೂರು ಪ್ಲಾಂಟೇಷನ್ ಮತ್ತು ಇಂಡಸ್ಟ್ರೀಸ್ ಲಿಮಿಟೆಡ್, ಬೆಂಗಳೂರು ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕು, ತೂಬಗೆರೆ ಹೋಬಳಿ, ಕಂಚಿಗನಾಳ ಗ್ರಾಮದ ಸ.ನಂ.199 ರಲ್ಲಿ 19.28 ಎಕರೆ ಜಮೀನನ್ನು ತೋಟಗಾರಿಕೆ ಮತ್ತು ಪುಷ್ಪಾಭಿವೃದ್ಧಿ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಹಾಗೂ ನಮೂನೆ 15-ಎ ಮತ್ತು 15-ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಎಲ್‌ಆರ್‌ಎಫ್:ಎಸ್‌ಆರ್:6:98-99, ದಿನಾಂಕ: 8.2.99 ಮತ್ತು 21.4.2003 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸರ್ವೆ ನಂಬರ್‌ಗಳಲ್ಲಿ ಒಟ್ಟು 19.28 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಸಂಸ್ಥೆಯು ಕಂಪನಿ ಕಾಯ್ದೆ 1956 ರಂತೆ ದಿನಾಂಕ: 9.1.1987 ರಂದು ನೋಂದಾಯಿಸಲ್ಪಟ್ಟಿದೆ. ಅರ್ಜಿದಾರರು ಪ್ರಾಜೆಕ್ಟ್ ವರದಿಯನ್ನು ಸಲ್ಲಿಸಿದ್ದು, ಅದು ಅರ್ಜಿದಾರರ ಉದ್ದೇಶಕ್ಕೆ ಪೂರಕವಾಗಿದೆ. ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪಿಟಿಸಿಎಲ್ ಕಾಯ್ದೆಗೆ ಒಳಪಡುವುದಿಲ್ಲ. ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು, ಓಡಿಪಿ:ಸಿಡಿಪಿ ವ್ಯಾಪ್ತಿ ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಯ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1) (V)ರ ಪ್ರಕಾರ ಕೈಗಾರಿಕಾ ಉದ್ದೇಶಕ್ಕೆ 20 ಯೂನಿಟ್‌ವರೆಗೆ ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1995ರ ಕಲಂ 109(1) (V) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮ 1996ರ ನಿಯಮ 38ಬಿ (5) (ಎ) ಮತ್ತು (ಬಿ) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಲು ದೊಡ್ಡಬಳ್ಳಾಪುರ ತಾಲ್ಲೂಕು, ತೂಬಗೆರೆ ಹೋಬಳಿ, ಕಂಚಿಗನಾಳ ಗ್ರಾಮದ ಸ.ನಂ. 199 ರಲ್ಲಿ 19.28 ಎಕರೆ ಜಮೀನನ್ನು ಬಾಲನೂರು ಪ್ಲಾಂಟೇಷನ್ ಮತ್ತು ಇಂಡಸ್ಟ್ರೀಸ್ ಲಿಮಿಟೆಡ್, ಎಂಪಾಯಿರ್ ಇನ್‌ಫೆಂಟ್ರಿ ರಸ್ತೆ, ಬೆಂಗಳೂರು-1, ಇವರಿಗೆ ತೋಟಗಾರಿಕೆ ಮತ್ತು ಪುಷ್ಪಾಭಿವೃದ್ಧಿ

ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 109 (1) (v) ರಡಿ ವಿನಾಯ್ತಿ ನೀಡಿ, ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಶೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 38 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಶೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
4) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ : ಓಡಿಪಿ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
5) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
6) ಈ ಅನುಮತಿಯು ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1184

**ವಿ. ರಾಧಾಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ.ಸು.).

## ಸಹಕಾರ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಸಇ 251 ಎಂಆರ್ಇ 2001, ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್ 2003

ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಅಧಿನಿಯಮ, 1966ರ ಕಲಂ 11(1) (ix) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಕೆ.ಆರ್. ಪೇಟೆ ಇದಕ್ಕೆ ಈ ಕೆಳಕಂಡ ಮೂವರು ಜನರನ್ನು, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ, ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿದೆ.

1. ಶ್ರೀ ಸ್ವಾಮಿಗೌಡ ಬಿನ್ ಕರೀಗೌಡ, ಬೂಕನಕೆರೆ, ಕೃಷ್ಣರಾಜಪೇಟೆ ತಾಲ್ಲೂಕು.
2. ಶ್ರೀ ಎಲ್.ಪಿ. ನಂಜಪ್ಪ ಬಿನ್ ಪುಟ್ಟಪ್ಪ,
   ಲಕ್ಷ್ಮೀಪುರ, ಕಿಕ್ಕೇರಿ ಹೋಬಳಿ, ಕೃಷ್ಣರಾಜಪೇಟೆ ತಾಲ್ಲೂಕು.
3. ಶ್ರೀ ಬಸ್ತಿರಂಗಪ್ಪ ಬಿನ್ ಜವರಯ್ಯ, ಬಸ್ತಿಹೊಸಕೋಟೆ,
   ಮಾವಿನಕೆರೆ ಪೋಸ್ಟ್, ಬೂಕನಕೆರೆ ಹೋಬಳಿ, ಕೃಷ್ಣರಾಜಪೇಟೆ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1185

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ಅಧಿಸೂಚನೆ

### ಸಂಖ್ಯೆ: ಸಿಎಂಡಬ್ಲ್ಯೂ 151 ಎನ್ಎಂಎಸ್ 2000, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2003

ಶೃಂಗೇರಿ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ (ನಿ)ದ ಆಡಳಿತ ಮಂಡಳಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 151 ಎನ್ಎಂಎಸ್ 2000, ದಿನಾಂಕ: 27.11.2000 ರಲ್ಲಿ ನಾಮನಿರ್ದೇಶನ ಮಾಡಲಾಗಿದ್ದ ಶ್ರೀಮತಿ ಶೋಭರಾಣಿ ಕೋಂ ಪುಟ್ಟಪ್ಪ, ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

1959ರ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮದ 29(1)ನೇ ಪ್ರಕರಣದಡಿ ನಿಹಿತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಶೋಭರಾಣಿ ಕೋಂ ಪುಟ್ಟಪ್ಪ ಇವರಿಂದ ತೆರವಾದ ಸ್ಥಾನದಲ್ಲಿ ಶ್ರೀಮತಿ ಜಯಮ್ಮ ಕೋಂ ತಿಮ್ಮಪ್ಪ ಕೈಮನೆ, ಧರೆಕೊಪ್ಪ ಅಂಚೆ, ಶೃಂಗೇರಿ ತಾಲ್ಲೂಕು ಇವರನ್ನು ಆಡಳಿತ ಮಂಡಳಿಯ ಸದಸ್ಯರನ್ನಾಗಿ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1186

**ಕೆ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಪಸಂಮೀ 127 ಪಅಸೇ 2003, ಬೆಂಗಳೂರು, ದಿನಾಂಕ: 6ನೇ ಅಕ್ಟೋಬರ್ 2003**

ಭಾರತೀಯ ಪಶುವೈದ್ಯಕೀಯ ಪರಿಷತ್ತಿನ ಕಾಯ್ದೆ 1984ರ 32ನೇ ಸೆಕ್ಷನ್‌ನಲ್ಲಿ ಸೂಚಿಸಿರುವಂತೆ ಕರ್ನಾಟಕ ಪಶುವೈದ್ಯಕೀಯ ಪರಿಷತ್ತಿಗೆ 4 ಸದಸ್ಯರುಗಳನ್ನು ಚುನಾವಣೆ ಮೂಲಕ ನೇಮಿಸಬೇಕಿದ್ದು, ಈ ಕುರಿತು ಚುನಾವಣೆ ನಡೆಸುವ ಸಲುವಾಗಿ ಕರ್ನಾಟಕ ಪಶುವೈದ್ಯಕೀಯ ಪರಿಷತ್ತು ನಿಯಮ 1998ರ ನಿಯಮ 9 ರನ್ವಯ ಡಾ: ಎನ್. ರಾಜಗೋಪಾಲ್ ಜಂಟಿ ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವೆಗಳು ಬೆಂಗಳೂರು ವಿಭಾಗ, ಬೆಂಗಳೂರು ರವರನ್ನು ಈ ಮೂಲಕ ರಿಟರ್ನಿಂಗ್ ಆಫೀಸರನ್ನಾಗಿ ನೇಮಿಸಿ ಆದೇಶಿಸಿದೆ.

ಸದರಿಯವರು ನಿಯಮಾನುಸಾರ ಕರ್ನಾಟಕ ಪಶುವೈದ್ಯಕೀಯ ಪರಿಷತ್ತಿಗೆ ಚುನಾವಣೆ ನಡೆಸಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1187

**ಪಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 11 ಯುಡಬ್ಲ್ಯೂಎಸ್ 2003, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2003**

ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿ ಕಾಯ್ದೆ 1973 (1974ರ ಕರ್ನಾಟಕ ಕಾಯ್ದೆ ಸಂಖ್ಯೆ 25)ರ ಸೆಕ್ಷನ್ 21 ಮತ್ತು 22(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೈಲಹೊಂಗಲ ಪಟ್ಟಣದ ಆಶ್ರಯ ಕಾಲೋನಿಗೆ ನೀರು ಸರಬರಾಜು ಯೋಜನೆಗೆ ರೂ.19.76 ಲಕ್ಷಗಳು (ಒಟ್ಟು ರೂಪಾಯಿ ಹತ್ತೊಂಭತ್ತು ಲಕ್ಷಗಳು ಮತ್ತು ಎಪ್ಪತ್ತಾರು ಸಾವಿರಗಳು ಮಾತ್ರ) ಅಂದಾಜು ವೆಚ್ಚದಲ್ಲಿ ನೀರು ಸರಬರಾಜು ಮಾಡುವ ಯೋಜನೆಯನ್ನು ಠೇವಣಿ ಆಧಾರದ ಮೇಲೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿಯು ಕೈಗೆತ್ತಿಕೊಳ್ಳಲು ಟಿ.ಎಂ.ಸಿ.ಯು ಡೆಪಾಸಿಟ್ ಮೊತ್ತವನ್ನು (ಕಾಂಟ್ರಿಬ್ಯೂಷನ್) ವಹಿಸಿಕೊಳ್ಳುವ ನಿಬಂಧನೆಗೊಳಪಟ್ಟಂತೆ ಸರ್ಕಾರವು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1189

**ವಿ. ಶ್ರೀಧರ್‌ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ನಅಇ 197 ಬೆಂರೂಪ್ರಾ 2003, ಬೆಂಗಳೂರು, ದಿನಾಂಕ: 5ನೇ ನವೆಂಬರ್ 2003**

ದಿನಾಂಕ: 16.12.2000, ಸಂಖ್ಯೆ: ನಅಇ 43 ಬೆಂರೂಪ್ರಾ 2000ರ ಅಧಿಸೂಚನೆಯನ್ನು ರದ್ದುಪಡಿಸಿ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 3(ಎ) ಮತ್ತು 3(ಎಂ) ಹಾಗೂ 5 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ದಾವಣಗೆರೆ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು ಮತ್ತು ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

| ಕ್ರ. ಸಂ. | ಹೆಸರು ಮತ್ತು ವಿಳಾಸ | ವರ್ಗ | ಹುದ್ದೆ |
|---|---|---|---|
| 1 | ಶ್ರೀ ಶೌಖತ್ ಆಲಿ ಬಿನ್ ಲೇಟ್ ಮಹಮದ್ ಹುಸೇನ್,<br>ಚಾಮರಾಜಪೇಟೆ ಮುಖ್ಯರಸ್ತೆ, ದಾವಣಗೆರೆ | ಸಾಮಾನ್ಯ | ಅಧ್ಯಕ್ಷರು |
| 2 | ಶ್ರೀ ಕೆ.ಆರ್. ಗಂಗರಾಜು ಬಿನ್ ರಂಗಪ್ಪ,<br>ಬೋವಿ ಕಾಲೋನಿ, ಆಜಾದ್‌ನಗರ, ದಾವಣಗೆರೆ. | ಪ.ಜಾತಿ | ಸದಸ್ಯರು |
| 3 | ಶ್ರೀ ಹೆಚ್. ಜಬ್ಬರ್ ಖಾನ್ ಬಿನ್ ಹೆಚ್ ಮಜೀರ್ ಖಾಸ್<br>ಜುಮ್ಮಾಮಸೀದಿ ಹತ್ತಿರ, ಹಳ್ಳದಕೆರೆ, ಹರಿಹರ, ದಾವಣಗೆರೆ ಜಿಲ್ಲೆ. | ಅಲ್ಪಸಂಖ್ಯಾತರು | ಸದಸ್ಯರು |
| 4 | ಶ್ರೀ ದೇವಜ್ಜರ ನಾಗರಾಜು ಬಿನ್ ದೇವರಹಟ್ಟಿ,<br>ದ್ಯಾಮಪ್ಪ ಶಿವಾಜಿ ಸರ್ಕಲ್, ದಾವಣಗೆರೆ | ಹಿಂದುಳಿದ ವರ್ಗ | ಸದಸ್ಯರು |
| 5 | ಶ್ರೀಮತಿ ನಿರ್ಮಲಾ ಅಣವೇಕರ್ ಕೋಂ ಡಾ: ಅಣವೇಕರ್,<br>ರಾಮಕೃಷ್ಣ ಆಶ್ರಮ ಹತ್ತಿರ, ಎಂ.ಸಿ.ಸಿ. ಎ ಬ್ಲಾಕ್, ದಾವಣಗೆರೆ. | ಮಹಿಳೆ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1190

**ವಿ. ಶ್ರೀಧರ್‌ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.